## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 196
2. ಸದಸ್ಯರ ಹೆಸರು : ಶ್ರೀಮತಿ ಎಸ್.ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು)
3. ಉತ್ತರಿಸಬೇಕಾದ ದಿನಾಂಕ : 03.03.2020
4. ಉತ್ತರಿಸುವ ಸಚಿವರು : ಸಹಕಾರ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಕಾಳು ಮೆಣಸಿಗೆ ಆರ್.ಎಂ.ಸಿ ವತಿಯಿಂದ 1.5% ಸೆಸ್ ವಿಧಿಸುತ್ತಿರುವುದರಿಂದ, ಬೆಳೆಹಾನಿ ಹಾಗೂ ಬೆಲೆ ಕುಸಿತದಿಂದ ಈಗಾಗಲೇ ಕಂಗೆಟ್ಟಿರುವ ರೈತರು ಮತ್ತಷ್ಟು ಸಂಕಷ್ಟಕ್ಕೆ ಸಿಲುಕಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕಾಳು ಮೆಣಸಿಗೆ 1.5% ಸೆಸ್ ವಿಧಿಸುತ್ತಿರುವುದು ಸರ್ಕಾರದ ಗಮನದಲ್ಲಿದೆ. |
| ಆ. | ಬಂದಿದ್ದಲ್ಲಿ, ಸೆಸ್ ವಿಧಿಸುತ್ತಿರುವುದನ್ನು ಕೈಬಿಡಲಾಗುವುದೇ; | ರಾಜ್ಯದಲ್ಲಿ ಕಾಳುಮೆಣಸು ಒಳಗೊಂಡಂತೆ 92 ಕೃಷಿ ಉತ್ಪನ್ನಗಳನ್ನು ಅಧಿಸೂಚಿತ ಮಾರಾಟ ನಿಯಂತ್ರಣಕ್ಕೆ ಒಳಪಡಿಸಲಾಗಿದೆ.<br><br>ರಾಜ್ಯದಲ್ಲಿ ಏಕ ಹಂತದ ಮಾರುಕಟ್ಟೆ ಶುಲ್ಕ ಆಕರಣೆ ಪದ್ಧತಿ ಜಾರಿಯಲ್ಲಿದ್ದು, ರೈತರಿಂದ ಮಾರುಕಟ್ಟೆ ಶುಲ್ಕವನ್ನು ಆಕರಿಸುವುದಿಲ್ಲ. ಅವರ ಉತ್ಪನ್ನಗಳನ್ನು ಖರೀದಿಸುವ ಖರೀದಿದಾರರಿಂದ ಮೊದಲ ಹಂತದ ವಹಿವಾಟಿಗೆ ಮಾತ್ರ ಮಾರುಕಟ್ಟೆ ಶುಲ್ಕವನ್ನು ವಿಧಿಸಲಾಗುವುದು.<br><br>ಅಧಿಸೂಚಿತ ಕೃಷಿ ಉತ್ಪನ್ನಗಳ ಖರೀದಿದಾರರಿಂದ ಶೇ.1.5 ರಂತೆ ಮಾರುಕಟ್ಟೆ ಶುಲ್ಕ ಆಕರಣೆ ಮಾಡಿ ಮಾರುಕಟ್ಟೆ ನಿಧಿಗೆ ಸಮಿತಿಗಳು ಜಮೆ ಮಾಡಿಕೊಳ್ಳುತ್ತವೆ. ಇದರಲ್ಲಿ 0.5 ರಷ್ಟು ವಂತಿಗೆಯನ್ನು ಸರ್ಕಾರವು ಸ್ಥಾಪಿಸಿರುವ ಆವರ್ತ ನಿಧಿಗೆ ಜಮೆ ಮಾಡುತ್ತಿದ್ದು, ಮಾರುಕಟ್ಟೆಯಲ್ಲಿ ಧಾರಣೆ ಕುಸಿತ ಕಂಡ ಸಂದರ್ಭದಲ್ಲಿ ಸರ್ಕಾರವು ಬೆಂಬಲ ಬೆಲೆಯನ್ನು ಘೋಷಿಸಿ ರೈತರಿಂದ ಉತ್ಪನ್ನಗಳನ್ನು ಖರೀದಿ ಮಾಡಲು ಆವರ್ತ ನಿಧಿ ಬಳಕೆಯಾಗುತ್ತದೆ.<br>ಈ ನಿಧಿ ರೈತರ ಅನುಕೂಲಕ್ಕಾಗಿ ಹಾಗೂ ಅಭಿವೃದ್ಧಿಗಾಗಿ ಬಳಸಲಾಗುತ್ತಿದೆ. |
| ಇ. | ಯಾವ ಕಾಲಮಿತಿಯೊಳಗೆ ಈ ಕುರಿತು ಕ್ರಮ ಕೈಗೊಂಡು, ತೀವ್ರ ಸಂಕಷ್ಟದಲ್ಲಿರುವ ರೈತರ ನೆರವಿಗೆ ಧಾವಿಸಲಾಗುವುದು? | |

**ಸಂಖ್ಯೆ: ಸಇ 111 ಎಂಆರ್‌ಇ 2020**

(ಎಸ್.ಟಿ.ಸೋಮಶೇಖರ್)

**ಸಹಕಾರ ಸಚಿವರು**